## ಕರ್ನಾಟಕ ವಿಧಾನ ಪರಿಷತ್ತು.

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 164
2. ಸದಸ್ಯರ ಹೆಸರು : ಎನ್.ರವಿಕುಮಾರ್.
3. ಉತ್ತರಿಸುವ ದಿನಾಂಕ : 14.12.2021
4. ಉತ್ತರಿಸುವ ಸಚಿವರು : ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದ ಸಕ್ಕರೆ ಕಾರ್ಖಾನೆಗಳು ಕಬ್ಬು ಬೆಳೆಯುವ ರೈತರಿಗೆ ನೀಡಬೇಕಾದ ಬಾಕಿ ಮೊತ್ತ ಎಷ್ಟು; (ಕಾರ್ಖಾನೆವಾರು ವಿವರ ನೀಡುವುದು) | ರಾಜ್ಯದ ಸಕ್ಕರೆ ಕಾರ್ಖಾನೆಗಳಿಂದ 2016-17, 2017-18 ಮತ್ತು 2020-21ನೇ ಹಂಗಾಮುಗಳಲ್ಲಿನ ಕಬ್ಬು ಬಿಲ್ಲು ಬಾಕಿಯನ್ನು ರೈತರಿಗೆ ಪೂರ್ಣವಾಗಿ ಪಾವತಿಸಲಾಗಿರುತ್ತದೆ. ಉಳಿದಂತೆ, 2015-16, 2018-19 ಮತ್ತು 2019-20ನೇ ಹಂಗಾಮುಗಳಲ್ಲಿ ಕಾರ್ಯನಿರ್ವಹಿಸಿರುವ ಸಕ್ಕರೆ ಕಾರ್ಖಾನೆಗಳು ಕಬ್ಬು ಬೆಳೆಯುವ ರೈತರಿಗೆ ಪಾವತಿಸಲು ಬಾಕಿ ಉಳಿಸಿಕೊಂಡಿರುವ ಕಾರ್ಖಾನೆವಾರು ವಿವರಗಳನ್ನು **ಅನುಬಂಧ-1** ರಲ್ಲಿ ಒದಗಿಸಿದೆ. |
| (ಆ) | ರಾಜ್ಯದ ಸಕ್ಕರೆ ಕಾರ್ಖಾನೆಗಳು ಒಂದು ಟನ್ ಕಬ್ಬಿಗೆ ನೀಡುವ ದರ ಎಷ್ಟು; ಸರ್ಕಾರವು ರೈತರಿಗೆ ನೀಡುವ ದರ ಎಷ್ಟು; | ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: 3(4)2020-ಎಸ್‌ಪಿ I, ದಿನಾಂಕ: 31.08.2021ರಲ್ಲಿ 2021-22ನೇ ಸಕ್ಕರೆ ಹಂಗಾಮಿಗೆ ಈ ಕೆಳಗಿನಂತೆ ನ್ಯಾಯಯುತ ಮತ್ತು ಲಾಭದಾಯಕ ಬೆಲೆಯನ್ನು (ಎಫ್.ಆರ್.ಪಿ) ನಿಗದಿಗೊಳಿಸಿದೆ.<br>1. ಶೇಕಡ 10.00 ರಷ್ಟು ಸಕ್ಕರೆ ಇಳುವರಿಗೆ ಪ್ರತಿ ಮೆ.ಟನ್ ಕಬ್ಬಿಗೆ ರೂ. 2900.00<br>2. ಶೇಕಡ 10.00ಕ್ಕೆ ಮೇಲ್ಪಟ್ಟು ಇಳುವರಿಯ ನಂತರದ ಶೇಕಡಾ 0.1 ರಷ್ಟು ಇಳುವರಿಗೆ ಪ್ರತಿ ಕ್ವಿಂಟಾಲ್ ಕಬ್ಬಿಗೆ ರೂ.2.90 ರಂತೆ ಹೆಚ್ಚುವರಿ ಬೆಲೆ.<br>3. ಶೇ.10.00ಕ್ಕಿಂತ ಕಡಿಮೆ ಹಾಗೂ ಶೇಕಡ 9.5ಕ್ಕೆ ಮೇಲ್ಪಟ್ಟು ಇಳುವರಿ ಹೊಂದಿರುವ ಸಕ್ಕರೆ ಕಾರ್ಖಾನೆಗಳಿಗೆ ಶೇಕಡ 0.1ರಷ್ಟು ಇಳುವರಿಗೆ ಪ್ರತಿ ಕ್ವಿಂಟಾಲ್‌ಗೆ ರೂ.2.90ರ ಸರಾಸರಿಯಂತೆ ನ್ಯಾಯ ಮತ್ತು ಲಾಭದಾಯಕ ಬೆಲೆಯನ್ನು ಕಡಿಮೆ ಮಾಡುವುದು.<br>4. ಶೇಕಡ 9.5ಕ್ಕಿಂತ ಕಡಿಮೆ ಇಳುವರಿ ಹೊಂದಿರುವ ಕಾರ್ಖಾನೆಗಳಿಗೆ ಪ್ರತಿ ಮೆಟ್ರಿಕ್ ಟನ್‌ಗೆ ರೂ. 2788.00ಗಳ ನ್ಯಾಯಯುತ ಮತ್ತು ಲಾಭದಾಯಕ ಬೆಲೆ.<br>ಮೇಲ್ಕಂಡಂತೆ ಕೇಂದ್ರ ಸರ್ಕಾರವು 2021-22ನೇ ಸಕ್ಕರೆ ಹಂಗಾಮಿಗೆ ನಿಗದಿಪಡಿಸಿರುವ ಎಫ್.ಆರ್.ಪಿ ಆಧಾರದ ಮೇಲೆ ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ 2013 ಮತ್ತು ತಿದ್ದುಪಡಿ ಅಧಿನಿಯಮ 2014ರ ಕಲಂ 2(ii) (ಇಎ) ಮತ್ತು 9(1) ರನ್ವಯ ಕಾರ್ಖಾನೆವಾರು ನ್ಯಾಯಯುತ ಮತ್ತು ಲಾಭದಾಯಕ ಬೆಲೆಯನ್ನು ಘೋಷಿಸಿ ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯದ ದಿನಾಂಕ:29.10.2021ರ ಆದೇಶದಲ್ಲಿ ಅಧಿಕೃತವಾಗಿ ಪ್ರಕಟಿಸಲಾಗಿದೆ. ಆದೇಶದ ಪ್ರತಿಯನ್ನು **ಅನುಬಂಧ-2** ರಲ್ಲಿ ಒದಗಿಸಿದೆ. |

......2

| | | |
|---|---|---|
| (ಇ) | ಸರ್ಕಾರವು ಕಬ್ಬಿಗೆ ನಿಗದಿಪಡಿಸಿದ ಬೆಂಬಲ ಬೆಲೆ ಎಷ್ಟು? | ಪ್ರಸ್ತುತ ಕಬ್ಬಿಗೆ ಬೆಂಬಲ ಬೆಲೆ (ಎಂಎಸ್‌ಪಿ) ಘೋಷಿಸುವ ಪದ್ಧತಿ ಇರುವುದಿಲ್ಲ. ಆದರೆ ಕೇಂದ್ರ ಸರ್ಕಾರವು ಪ್ರತಿ ಸಕ್ಕರೆ ಹಂಗಾಮು ಪ್ರಾರಂಭವಾಗುವ ಮೊದಲೇ ಕಬ್ಬಿಗೆ ಮೊದಲ ಕಂತಿನ ರೂಪದಲ್ಲಿ ನ್ಯಾಯಯುತ ಮತ್ತು ಲಾಭದಾಯಕ ಬೆಲೆಯನ್ನು (ಎಫ್.ಆರ್.ಪಿ) ಘೋಷಿಸುತ್ತದೆ. ಇದರ ಆಧಾರದ ಮೇಲೆ ಸಕ್ಕರೆ ಕಾರ್ಖಾನೆಗಳ ಹಿಂದಿನ ಹಂಗಾಮಿನ ಸಕ್ಕರೆ ಇಳುವರಿಯನ್ನು ಆಧರಿಸಿ ಪ್ರತಿ ಮೆಟ್ರಿಕ್ ಟನ್ ಕಬ್ಬಿಗೆ ರೈತರಿಗೆ ಪಾವತಿಸಬೇಕಾದ ಎಫ್.ಆರ್.ಪಿ. ದರವನ್ನು ನಿಗದಿಗೊಳಿಸಿ ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯದಿಂದ ಆದೇಶ ಹೊರಡಿಸಲಾಗುತ್ತಿದೆ. ಪ್ರಸ್ತುತ ಮೊದಲ ಕಂತಿನ ದರವನ್ನು ಪಾವತಿಸುವಂತೆ ಎಲ್ಲಾ ಸಕ್ಕರೆ ಕಾರ್ಖಾನೆಗಳಿಗೆ ಸೂಚನೆಯನ್ನು ನೀಡಲಾಗಿರುತ್ತದೆ. |

ಸಿಐ 347 ಸಿಓಎಫ್ 2021

(ಶಂಕರ ಬ.ಪಾಟೀಲ ಮುನೇನಕೊಪ್ಪ)
ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು

ಅನುಬಂಧ-1

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) ಇವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 164 ಗೆ ಕರಡು ಉತ್ತರಗಳು.

ರಾಜ್ಯದಲ್ಲಿ 2015-16, 2018-19, 2019-20, ಸಾಲುಗಳಲ್ಲಿ ಕಾರ್ಯನಿರ್ವಹಿಸಿರುವ ಸಕ್ಕರೆ ಕಾರ್ಖಾನೆಗಳು ಕಬ್ಬು ಬೆಳೆಗಾರ ರೈತರಿಗೆ ಪಾವತಿಸಲು ಬಾಕಿ ಉಳಿಸಿಕೊಂಡಿರುವ ಕಬ್ಬು ಬಿಲ್ಲಿನ ಕಾರ್ಖಾನೆವಾರು ವಿವರಗಳು

| ಕ್ರ ಸಂ | ಹಂಗಾಮು | ಕಾರ್ಖಾನೆಯ ಹೆಸರು | ಕಬ್ಬು ಬಿಲ್ಲು ಬಾಕಿ ಮೊತ್ತ (ರೂ. ಲಕ್ಷಗಳಲ್ಲಿ) | ಷರಾ |
|---|---|---|---|---|
| 1 | 2015-16 | ಶಿವಸಾಗರ ಶುಗರ್ಸ್ ಅಂಡ್ ಅಗ್ರೋ ಪ್ರಾಡೆಕ್ಟ್ ಲಿ., ಉದುಮಡಿ ಗ್ರಾಮ, ರಾಮದುರ್ಗ ತಾಲ್ಲೂಕು, ಬೆಳಗಾವಿ ಜಿಲ್ಲೆ. | 1167.00 | ಶಿವಸಾಗರ ಶುಗರ್ಸ್ ಅಂಡ್ ಅಗ್ರೋ ಪ್ರಾಡೆಕ್ಟ್ ಲಿ., ಉದುಮಡಿ ಗ್ರಾಮ, ರಾಮದುರ್ಗ ತಾಲ್ಲೂಕು, ಬೆಳಗಾವಿ ಜಿಲ್ಲೆ ಇದಕ್ಕೆ ಕಬ್ಬು ನಿಯಂತ್ರಣ ಆದೇಶ 1966ರ ಖಂಡ 3(8) ಅವಕಾಶಗಳಂತೆ ಭೂ ಕಂದಾಯ ಕಾಯ್ದೆ ,1964 ರಿತ್ಯಾ ಭೂ ಕಂದಾಯ ಬಾಕಿಯೆಂದು ಪರಿಗಣಿಸಿ ಬೆಳಗಾವಿ ಜಿಲ್ಲಾಧಿಕಾರಿಗಳಿಗೆ ವಸೂಲಾತಿ ಪ್ರಮಾಣ ಪತ್ರ ಹೊರಡಿಸಲಾಗಿದೆ. ಮುಂದುವರೆದು ಈಗ ಕಾರ್ಖಾನೆಯನ್ನು ಅರಿಯಂತ್ ಶುಗರ್ಸ್ ಇವರು ಗುತ್ತಿಗೆ ಪಡೆದುಕೊಂಡು ಸುಮಾರು ರೂ.3.4 ಕೋಟಿಯಷ್ಟು ರೈತರಿಗೆ ಬಾಕಿ ಹಣ ಕೊಟರುತ್ತಾರೆ. ಮಾರ್ಚ.31.03.2022ರ ಒಳಗಾಗಿ ಪೂರ್ತಿ ಹಣ ಕೊಡಲು ಒಪ್ಪಿಕೊಂಡಿರುತ್ತಾರೆ |
| 2 | 2018-19 | ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ, ಹಳ್ಳೀಖೇಡ್, ಹುಮ್ನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ. | 89.00 | ಕಬ್ಬು ನಿಯಂತ್ರಣ ಆದೇಶ 1966ರ ಖಂಡ 3(8) ಅವಕಾಶಗಳಂತೆ ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರಿತ್ಯಾ ಭೂ ಕಂದಾಯ ಬಾಕಿಯೆಂದು ಪರಿಗಣಿಸಿ ಜಿಲ್ಲಾಧಿಕಾರಿಗಳಿಗೆ ವಸೂಲಾತಿ ಪ್ರಮಾಣ ಪತ್ರ ಹೊರಡಿಸಲಾಗಿದೆ, ಕಾರ್ಖಾನೆಗಳು ಕಳೆದ ಎರಡು ಹಂಗಾಮುಗಳಿಂದ ಕಬ್ಬು ಅರೆಯುವ ಕಾರ್ಯವನ್ನು ಸ್ಥಗಿತಗೊಳಿಸಿರುತ್ತವೆ ಅದರಿಂದ ರೈತರ ಕಬ್ಬಿನ ಬಿಲ್ಲು ವಸೂಲಾಗದೆ ಬಾಕಿ ಉಳಿದಿರುತ್ತದೆ. |
| | | ಭವಾನಿ ಶುಗರ್ಸ್ ಲಿ., ಬರೂರು ಬೀದರ್ ತಾಲ್ಲೂಕು & ಜಿಲ್ಲೆ. | 180.00 | |
| | | ಸಾವರಿನ್ ಇಂಡಸ್ಟ್ರೀಸ್ ಲಿ., ತೇರದಾಳ ಗ್ರಾಮ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. | 499.00 | |
| | | ಧ್ಯಾನಯೋಗಿ ಶ್ರೀ ಶಿವಕುಮಾರ ಸ್ವಾಮೀಜಿ ಶುಗರ್ಸ್ ಲಿ., ಹಿರೇಬೇವನೂರು, ಇಂಡಿ ತಾಲ್ಲೂಕು, ವಿಜಯಪುರ ಜಿಲ್ಲೆ. | 125.00 | |
| 3. | 2019-20 | ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಸಿದ್ದ ಸಮುದ್ರ, ಬೈಲಹೋಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ. | 580.00 | ಕಬ್ಬು ನಿಯಂತ್ರಣ ಆದೇಶ 1966ರ ಖಂಡ 3(8) ಅವಕಾಶಗಳಂತೆ ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರಿತ್ಯಾ ಭೂ ಕಂದಾಯ ಬಾಕಿಯೆಂದು ಪರಿಗಣಿಸಿ ಜಿಲ್ಲಾಧಿಕಾರಿಗಳಿಗೆ ವಸೂಲಾತಿ ಪ್ರಮಾಣ ಪತ್ರ ಹೊರಡಿಸಲಾಗಿದೆ. ಸಕ್ಕರೆ ನಿಯಂತ್ರಣ ಕಾಯ್ದೆ ಪ್ರಕಾರ ಕಾನೂನಾತ್ಮಕ ಕ್ರಮ ಕೈಗೊಳ್ಳಲಾಗಿದೆ. |

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ
ಸಕ್ಕರೆ ನಿರ್ದೇಶಕರು.

ಅನುಬಂಧ - 2

ಆಯುಕ್ತರು
ಕಬ್ಬು ಅಭಿವೃದ್ಧಿ ಹಾಗೂ
ಸಕ್ಕರೆ ನಿರ್ದೇಶಕರು



ಕರ್ನಾಟಕ ಸರ್ಕಾರ

5ನೇ ಮಹಡಿ, ಎಫ್ ಬ್ಲಾಕ್, ಸಿಬಿಎಬಿ ಸಂಕೀರ್ಣ, ಕೆಹೆಚ್‌ಬಿ ಕಟ್ಟಡ,
ಕಾವೇರಿ ಭವನ, ಕೆ.ಜಿ.ರಸ್ತೆ, ಬೆಂಗಳೂರು-560 009
ದೂರವಾಣಿ: 080-22133390/22133392ಫ್ಯಾಕ್ಸ್: 080-22133391
ಇಮೇಲ್: canecommissioner@gmail.com
ವೆಬ್‌ಸೈಟ್:www.canecommissionarate.karnataka.gov.in

By R.P.A.D.

ವಿಷಯ:-2020-21ನೇ ಸಾಲಿನಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು ನುರಿಸಿದ ಕಬ್ಬಿನಿಂದ ಉತ್ಪಾದಿಸಲಾದ ಸಕ್ಕರೆ ಇಳುವರಿಯ ಆಧಾರದ ಮೇಲೆ 2021-22ನೇ ಸಾಲಿಗೆ ಮೊದಲ ಕಂತಿನ ರೂಪದಲ್ಲಿ ಪಾವತಿಸಬೇಕಾದ ನ್ಯಾಯ ಮತ್ತು ಲಾಭದಾಯಕ ಬೆಲೆ (Fair and Remunerative Price) ಪ್ರಕಟಣೆಯ ಕುರಿತು.

ಉಲ್ಲೇಖ:-ಗ್ರಾಹಕ ವ್ಯವಹಾರ, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಕೃಷಿ ಭವನ, ನವದೆಹಲಿ ಇವರ ಪತ್ರ ಸಂ: 3(4)/2020-ಎಸ್‌ಪಿ I ದಿನಾಂಕ 31.08.2021

-*-

**ಪೀಠಿಕೆ:**

ಕೇಂದ್ರ ಸರ್ಕಾರವು ಉಲ್ಲೇಖ (1) ರಂತೆ 2021-22ನೇ ಸಕ್ಕರೆ ಹಂಗಾಮಿಗೆ ಈ ಕೆಳಗಿನಂತೆ ನ್ಯಾಯ ಮತ್ತು ಲಾಭದಾಯಕ ಬೆಲೆಯನ್ನು (Fair and Remunerative Price) ನಿಗದಿಪಡಿಸಿದೆ.

1. ಶೇಕಡ 10.00 ರಷ್ಟು ಸಕ್ಕರೆ ಇಳುವರಿಗೆ ಪ್ರತಿ ಮೆಟ್ರಿಕ್ ಟನ್ ಕಬ್ಬಿಗೆ ರೂ.2900/-
2. ಶೇಕಡ 10.00 ಕ್ಕೆ ಮೇಲ್ಪಟ್ಟು ಇಳುವರಿಗೆ ನಂತರದ ಶೇಕಡ 1 ರಷ್ಟು ಇಳುವರಿಗೆ ಪ್ರತಿ ಮೆಟ್ರಿಕ್ ಟನ್‌ಗೆ ರೂ.290/- ರಂತೆ ಹೆಚ್ಚುವರಿ ಬೆಲೆ.
3. ಶೇಕಡ 10.00 ಕ್ಕಿಂತ ಕಡಿಮೆ ಹಾಗೂ ಶೇಕಡ 9.5ಕ್ಕೆ ಮೇಲ್ಪಟ್ಟ ಇಳುವರಿ ಹೊಂದಿರುವ ಸಕ್ಕರೆ ಕಾರ್ಖಾನೆಗಳಿಗೆ ಶೇಕಡ 1 ರಷ್ಟು ಇಳುವರಿಗೆ ಪ್ರತಿ ಮೆಟ್ರಿಕ್ ಟನ್‌ಗೆ ರೂ.290/-ರ ಸರಾಸರಿಯಂತೆ ನ್ಯಾಯ ಮತ್ತು ಲಾಭದಾಯಕ ಬೆಲೆಯನ್ನು ಕಡಿಮೆ ಮಾಡುವುದು
4. ಶೇಕಡ 9.5 ಕ್ಕಿಂತ ಕಡಿಮೆ ಇಳುವರಿ ಹೊಂದಿರುವ ಕಾರ್ಖಾನೆಗಳಿಗೆ ಪ್ರತಿ ಮೆಟ್ರಿಕ್ ಟನ್‌ಗೆ ರೂ.2755/- ಗಳ ನ್ಯಾಯ ಮತ್ತು ಲಾಭದಾಯಕ ಬೆಲೆ.

2020-21ನೇ ಸಾಲಿನಲ್ಲಿ ರಾಜ್ಯದಲ್ಲಿ ಕಾರ್ಯನಿರ್ವಹಿಸಿರುವ 66 ಸಕ್ಕರೆ ಕಾರ್ಖಾನೆಗಳು (ಈ ಪೈಕಿ ಶ್ರೀ ಸಂಗಂ ಸಹಕಾರಿ ಸಕ್ಕರೆ ಕಾರ್ಖಾನೆ, ಹುಕ್ಕೇರಿ ಮತ್ತು ಶ್ರೀ ಕೇದಾರ್‌ನಾಥ್ ಶುಗರ್ ಅಂಡ್ ಆಗ್ರೋ ಪ್ರಾಡಕ್ಟ್ಸ್ ಲಿ., ಬಾದಾಮಿ ಈ ಕಾರ್ಖಾನೆಗಳು ಪ್ರಾಯೋಗಿಕವಾಗಿ ಕಬ್ಬು ನುರಿಸಿರುತ್ತದೆ.) ಸಲ್ಲಿಸಿದ ಆರ್.ಟಿ 8(ಸಿ) ವರದಿಗಳ ಪ್ರಕಾರ ನುರಿಸಿದ ಕಬ್ಬಿನಿಂದ ಉತ್ಪಾದಿಸಲಾದ ಸಕ್ಕರೆ ಇಳುವರಿಯಂತೆ 2021-22ನೇ ಕಬ್ಬು ನುರಿಸುವ ಹಂಗಾಮಿಗೆ ರಾಜ್ಯದ ಸಕ್ಕರೆ ಕಾರ್ಖಾನೆಗಳು ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) (ತಿದ್ದುಪಡಿ) ಅಧಿನಿಯಮ-2014ರ ಕಲಂ 9(1) ರ ಪ್ರಕಾರ ಮೊದಲ ಕಂತಿನ ರೂಪದಲ್ಲಿ ಪಾವತಿಸಬೇಕಾದ ನ್ಯಾಯ ಮತ್ತು ಲಾಭದಾಯಕ ಬೆಲೆಯನ್ನು (Fair and Remunerative Price) ಪ್ರಕಟಿಸಲಾಗಿದೆ. ಈ ಕಬ್ಬಿನ ದರವು ಎಫ್.ಆರ್.ಪಿ. ನಿಯಮದಂತೆ ಎಕ್ಸ್-ಗೇಟ್ ದರವಾಗಿರುತ್ತದೆ.



ಈ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಕಾರ್ಖಾನೆವಾರು ನ್ಯಾಯ ಮತ್ತು ಲಾಭದಾಯಕ ಬೆಲೆ (Fair and Remunerative Price) ನಿಗದಿಗೊಳಿಸುವ ಸಂಬಂಧ ಈ ಕೆಳಕಂಡ ಆದೇಶ ಹೊರಡಿಸಿದೆ.

## ಆದೇಶ

ಸಂಖ್ಯೆ: ಡಿಎಸ್‌ಕೆ/ಎಸ್‌ಕೆ/20/2021–22 ದಿನಾಂಕ: 29.10.2021

ಕೇಂದ್ರ ಸರ್ಕಾರವು ಉಲ್ಲೇಖ (1) ರಂತೆ 2021–22ನೇ ಸಕ್ಕರೆ ಹಂಗಾಮಿಗೆ ನಿಗದಿಪಡಿಸಿರುವ ನ್ಯಾಯ ಮತ್ತು ಲಾಭದಾಯಕ ದರದ (Fair and Remunerative Price) ಆಧಾರದ ಮೇಲೆ ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ, 2013 ಮತ್ತು ತಿದ್ದುಪಡಿ ಅಧಿನಿಯಮ 2014ರ ಕಲಂ 2(ii)(ಇಎ) ಮತ್ತು 9(1) ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ಶಿವಾನಂದ ಹೆಚ್. ಕಲಕೇರಿ, ಭಾ.ರಾ.ಸೇ., ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಆದ ನಾನು 2021–22ನೇ ಸಾಲಿನಲ್ಲಿ ರಾಜ್ಯದಲ್ಲಿ ಕಾರ್ಯ ನಿರ್ವಹಿಸಿರುವ 66 ಸಕ್ಕರೆ ಕಾರ್ಖಾನೆಗಳು ನುರಿಸಿದ ಕಬ್ಬಿನಿಂದ ಉತ್ಪಾದಿಸಲಾದ ಸಕ್ಕರೆ ಇಳುವರಿಯನ್ನು ಆಧಾರವಾಗಿಟ್ಟುಕೊಂಡು 2020–21ನೇ ಸಾಲಿಗೆ ರಾಜ್ಯದ ಸಕ್ಕರೆ ಕಾರ್ಖಾನೆಗಳು ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) (ತಿದ್ದುಪಡಿ) ಅಧಿನಿಯಮ 2014ರ ಕಲಂ 9(1)ರ ಪ್ರಕಾರ ಮೊದಲ ಕಂತಿನ ರೂಪದಲ್ಲಿ ಪಾವತಿಸಬೇಕಾದ ನ್ಯಾಯ ಮತ್ತು ಲಾಭದಾಯಕ ಬೆಲೆಯನ್ನು (Fair and Remunerative Price) ಈ ಕೆಳಕಂಡಂತೆ ಅಧಿಕೃತವಾಗಿ ಪ್ರಕಟಿಸಿರುತ್ತೇನೆ. ಈ ಕಬ್ಬಿನ ದರವು ಎಫ್.ಆರ್.ಪಿ. ನಿಯಮದಂತೆ ಎಕ್ಸ್–ಗೇಟ್ ದರವಾಗಿರುತ್ತದೆ. ಈ ಪ್ರಕಟಣೆಯಲ್ಲಿನ ಅಂಕಿ ಅಂಶಗಳು ಕೇಂದ್ರ ಸರ್ಕಾರವು ಕಾರ್ಖಾನೆವಾರು ಹೊರಡಿಸಿರುವ ನ್ಯಾಯ ಮತ್ತು ಲಾಭದಾಯಕ ಬೆಲೆಯ (Fair and Remunerative Price) ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

| ಕ್ರ. ಸಂ. | ಸಕ್ಕರೆ ಕಾರ್ಖಾನೆಗಳ ಹೆಸರು | 2020–21ನೇ ಸಾಲಿನಲ್ಲಿ (01.07.2020 ರಿಂದ 30.06.2021 ರವರೆಗೆ) | | | 2021–22ನೇ ಸಾಲಿಗೆ ಪ್ರತಿ ಮೆ.ಟನ್ ಕಬ್ಬಿಗೆ ಪಾವತಿಸಬೇಕಾದ ನ್ಯಾಯ ಮತ್ತು ಲಾಭದಾಯಕ ಬೆಲೆ (ಎಫ್‌ಆರ್‌ಪಿ) (ರೂ.ಗಳಲ್ಲಿ) |
|---|---|---|---|---|---|
| | | ನುರಿಸಿದ ಕಬ್ಬಿನ ಪ್ರಮಾಣ (ಮೆ. ಟನ್‌ಗಳಲ್ಲಿ) | ಉತ್ಪಾದಿಸಿದ ಸಕ್ಕರೆ ಪ್ರಮಾಣ (ಮೆ. ಟನ್‌ಗಳಲ್ಲಿ) | ಶೇಕಡ ಇಳುವರಿ (%) | |
| 1 | 2 | 3 | 4 | 5 | 6 |
| | **ಬೆಳಗಾವಿ ಜಿಲ್ಲೆ** | | | | |
| 1 | ಅಥಣಿ ಶುಗರ್ಸ್ ಲಿ., ವಿಷ್ಣು ಅಣ್ಣಾನಗರ, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ. | 1382419 | 152067 | 11.00 | 3190 |
| 2 | ಲೈಲಾ ಶುಗರ್ಸ್ ಲಿ., (ಗುತ್ತಿಗೆದಾರರು–ಭಾಗ್ಯಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ.,) ಕುಪ್ಪಟಗಿರಿ, ಖಾನಾಪುರ ತಾಲ್ಲೂಕು, ಬೆಳಗಾವಿ ಜಿಲ್ಲೆ. | 300107 | 34572 | 11.52 | 3341 |



| 1 | 2 | 3 | 4 | 5 | 6 |
|---|---|---|---|---|---|
| 3 | ಚಿದಾನಂದ ಬಸಪ್ರಭು ಕೋರೆ ಸಹಕಾರಿ ಸಕ್ಕರೆ ಕಾರ್ಖಾನೆ ನಿ. (ಧೂದ್‌ಗಂಗಾ ಕೃಷ್ಣಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ), ಚಿಕ್ಕೋಡಿ, ಬೆಳಗಾವಿ ಜಿಲ್ಲೆ | 1014714 | 113170 | 11.53 | 3344 |
| 4 | ಇ.ಐ.ಡಿ ಪ್ಯಾರಿ (ಇಂಡಿಯಾ) ಲಿ, (ಗುತ್ತಿಗೆದಾರರು ಧನಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ,) ಖಾನ್‌ಪೇಟೆ, ರಾಮದುರ್ಗ ತಾಲ್ಲೂಕು, ಬೆಳಗಾವಿ ಜಿಲ್ಲೆ. | 535843 | 61986 | 11.80 | 3422 |
| 5 | ಘಟಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಸಂಗನಕೇರಿ, ಗೋಕಾಕ್ ತಾಲ್ಲೂಕು, ಬೆಳಗಾವಿ ಜಿಲ್ಲೆ | 271423 | 28709 | 10.58 | 3068 |
| 6 | ಗೋಕಾಕ್ ಶುಗರ್ಸ್, ಕೊಳವಿ, ಗೋಕಾಕ್ ತಾಲ್ಲೂಕು, ಬೆಳಗಾವಿ ಜಿಲ್ಲೆ | 466687 | 53576 | 11.48 | 3329 |
| 7 | ಹಾಲಸಿದ್ದನಾಥ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ನಿಪ್ಪಾಣಿ, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ. | 434710 | 51509 | 11.85 | 3437 |
| 8 | ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಸಂಕೇಶ್ವರ, ಹುಕ್ಕೇರಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 740065 | 82510 | 11.15 | 3234 |
| 9 | ಕೃಷ್ಣಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಹಳಿಯಾಳ, ಅಥಣಿ ತಾಲ್ಲೂಕು, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 557993 | 60807 | 10.90 | 3161 |
| 10 | ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಎಂ.ಕೆ. ಹುಬ್ಬಳ್ಳಿ, ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ | 261861 | 27889 | 10.65 | 3089 |
| 11 | ರೇಣುಕಾ ಶುಗರ್ಸ್ ಲಿ., (ಗುತ್ತಿಗೆದಾರರು–ರಾಯಬಾಗ್ ಸಹಕಾರಿ ಸಕ್ಕರೆ ಕಾರ್ಖಾನೆ ನಿ.,) ಮೇಕಳಿ, ರಾಯಬಾಗ್ ತಾಲ್ಲೂಕು, ಬೆಳಗಾವಿ ಜಿಲ್ಲೆ. | 301952 | 31822 | 11.58 | 3358 |
| 12 | ರೇಣುಕಾ ಶುಗರ್ಸ್, ಬುರ್ಲಟ್ಟಿ, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 1175611 | 68149 | 11.22 | 3254 |
| 13 | ರೇಣುಕಾ ಶುಗರ್ಸ್, ಮನೋಳಿ, ಸವದತ್ತಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 1051173 | 98679 | 11.95 | 3466 |
| 14 | ಸತೀಶ್ ಶುಗರ್ಸ್ ಲಿ., ಹುಣಶ್ಯಾಳ, ಗೋಕಾಕ್ ತಾಲ್ಲೂಕು, ಬೆಳಗಾವಿ ಜಿಲ್ಲೆ. | 1366495 | 151711 | 11.10 | 3219 |



| 1 | 2 | 3 | 4 | 5 | 6 |
|---|---|---|---|---|---|
| 15 | ಶಿರಗುಪ್ಪಿ ಶುಗರ್ ವರ್ಕ್ಸ್ ಲಿ., ಕಾಗವಾಡ, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 704567 | 84697 | 12.02 | 3486 |
| 16 | ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಸಿದ್ದಸಮುದ್ರ, ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ. | 282634 | 31722 | 11.22 | 3254 |
| 17 | ಶಿವಶಕ್ತಿ ಶುಗರ್ಸ್ ಲಿ., ಸೌದತ್ತಿ, ರಾಯಬಾಗ್ ತಾಲ್ಲೂಕು, ಬೆಳಗಾವಿ ಜಿಲ್ಲೆ | 1338870 | 140472 | 11.50 | 3335 |
| 18 | ಉಗಾರ್ ಶುಗರ್ಸ್ ವರ್ಕ್ಸ್ ಲಿ, ಉಗಾರ್‌ಖುರ್ದ್, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 1947054 | 226515 | 11.56 | 3352 |
| 19 | ವೆಂಕಟೇಶ್ವರ ಪವರ್ ಪ್ರಾಜೆಕ್ಟ್ ಲಿ., ಬೇಡ್ಕಿಹಾಳ್, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ. | 981269 | 120697 | 12.30 | 3567 |
| 20 | ವಿಶ್ವರಾಜ್ ಶುಗರ್ ಇಂಡಸ್ಟ್ರೀಸ್ ಲಿ, ಬೆಲ್ಲದ ಬಾಗೇವಾಡಿ, ಹುಕ್ಕೇರಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 908955 | 79320 | 11.70 | 3393 |
| 21 | ಸೌಭಾಗ್ಯಲಕ್ಷ್ಮಿ ಶುಗರ್ಸ್, ಹಿರೇನಂದಿ, ಗೋಕಾಕ್ ತಾಲ್ಲೂಕು, ಬೆಳಗಾವಿ ಜಿಲ್ಲೆ | 337885 | 37375 | 11.06 | 3207 |
| 22 | ಬೆಳಗಾಂ ಶುಗರ್ಸ್ ಪ್ರೈ. ಲಿ., ಹುದಲಿ, ಬೆಳಗಾವಿ ತಾಲ್ಲೂಕು & ಜಿಲ್ಲೆ | 586547 | 65995 | 11.25 | 3263 |
| 23 | ಹರ್ಷ ಶುಗರ್ಸ್ ಲಿ., ಸೌದತ್ತಿ, ಸೌದತ್ತಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 602616 | 65866 | 10.93 | 3170 |
| 24 | ಅರಿಹಂತ್ ಶುಗರ್ಸ್ ಲಿ, ಜೈನಾಪುರ, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 330236 | 39683 | 12.02 | 3486 |
| 25 | ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ, ಕಾಕತಿ, ಬೆಳಗಾವಿ ಜಿಲ್ಲೆ | 121172 | 12687 | 10.47 | 3036 |
| 26 | ಶ್ರೀ ಸಂಗಂ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಹಿಡಕಲ್ ಡ್ಯಾಂ, ಹುಕ್ಕೇರಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 122569 | 13846 | 11.30 | 3277 |
| | **ಬಾಗಲಕೋಟೆ ಜಿಲ್ಲೆ** | | | | |
| 27 | ಬೀಳಗಿ ಶುಗರ್ಸ್ ಲಿ., ಬಡಗಂಡಿ, ಬೀಳಗಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 957716 | 101961 | 10.65 | 3089 |
| 28 | ಜೆಮ್ ಶುಗರ್ಸ್ ಲಿ., ಕುಂದರಗಿ, ಬೀಳಗಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 577758 | 52003 | 10.81 | 3135 |



| 1 | 2 | 3 | 4 | 5 | 6 |
|---|---|---|---|---|---|
| 29 | ಗೋದಾವರಿ ಶುಗರ್ಸ್ ಲಿ., ಸಮೀರವಾಡಿ, ಮುಧೋಳ್ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 2002849 | 147601 | 11.40 | 3306 |
| 30 | ಇಂಡಿಯನ್ ಕೇನ್ ಪವರ್ ಲಿ., ಉತ್ತೂರ್, ಮುಧೋಳ್ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. | 2014850 | 222487 | 11.04 | 3202 |
| 31 | ಜಮಖಂಡಿ ಶುಗರ್ಸ್ ಲಿ., ಹಿರೇಪಡಸಲಗಿ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 671946 | 55332 | 11.44 | 3318 |
| 32 | ನಿರಾಣಿ ಶುಗರ್ಸ್ ಲಿ, ಮುಧೋಳ್, ಬಾಗಲಕೋಟೆ ಜಿಲ್ಲೆ. | 1758542 | 167965 | 11.10 | 3219 |
| 33 | ಪ್ರಭುಲಿಂಗೇಶ್ವರ ಶುಗರ್ಸ್ ಲಿ., ಸಿದ್ದಾಪುರ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 1176815 | 118750 | 11.47 | 3326 |
| 34 | ಇ.ಐ.ಡಿ. ಪ್ಯಾರಿ (ಇಂಡಿಯಾ) ಲಿ., ನಾಯಿನೇಗಲಿ, ಬಾಗಲಕೋಟೆ ತಾಲ್ಲೂಕು ಮತ್ತು ಜಿಲ್ಲೆ | 520689 | 56641 | 11.13 | 3228 |
| 35 | ಶ್ರೀ ಸಾಯಿ ಪ್ರಿಯಾ ಶುಗರ್ಸ್ ಲಿ., ಹಿಪ್ಪರಗಿ/ ಮೈಗೂರು, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ, | 1444120 | 105074 | 11.20 | 3248 |
| 36 | ಎಂಆರ್‌ಎನ್ ಕೇನ್ ಪವರ್ ಲಿ., ಕಲ್ಲಾಪುರ, ಬಾಗಲಕೋಟೆ ಜಿಲ್ಲೆ | 523063 | 50740 | 10.93 | 3170 |
| 37 | ಶ್ರೀ ಕೇದಾರನಾಥ್ ಶುಗರ್ ಅಂಡ್ ಆಗ್ರೋ ಪ್ರಾಡಕ್ಟ್ಸ್ ಲಿ., ಕೆರಕಲಮಟ್ಟಿ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 96452 | 10345 | 11.92 | 3457 |
| | **ಬಳ್ಳಾರಿ ಜಿಲ್ಲೆ** | | | | |
| 38 | ಶ್ಯಾಮನೂರು ಶುಗರ್ಸ್ ಲಿ., ದುಗ್ಗಾವತಿ, ಹರಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ | 322297 | 18903 | 8.81 | 2755 |
| 39 | ಮೈಲಾರ ಶುಗರ್ಸ್ ಲಿ., ಬಿರಬ್ಬಿ, ಹೂವಿನಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ | 380202 | 36955 | 9.72 | 2819 |
| | **ಬೀದರ್ ಜಿಲ್ಲೆ** | | | | |
| 40 | ಮಹಾತ್ಮಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಹಿಂಚೆಕ್‌ಮತ್, ಭಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ | 323232 | 26182 | 8.10 | 2755 |
| 41 | ನಾರಂಜಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ. ಇಮಾಂಪುರ, ಬೀದರ್ ತಾಲ್ಲೂಕು ಮತ್ತು ಜಿಲ್ಲೆ | 252741 | 22999 | 9.10 | 2755 |
| 42 | ಭಾಲ್ಕೇಶ್ವರ ಶುಗರ್ಸ್ ಲಿ., ಬಾಜೋಳಗಾ, ಭಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ | 421680 | 26611 | 9.44 | 2755 |



| 1 | 2 | 3 | 4 | 5 | 6 |
|---|---|---|---|---|---|
| 43 | ಬೀದರ್ ಕಿಸಾನ್ ಸಕ್ಕರ್ ಕಾರ್ಖಾನಾ ಲಿ, ಮೊಗದಾಳ್, ಬೀದರ್ ತಾಲ್ಲೂಕು ಮತ್ತು ಜಿಲ್ಲೆ. | 222020 | 19745 | 8.90 | 2755 |
| | **ಚಾಮರಾಜನಗರ ಜಿಲ್ಲೆ** | | | | |
| 44 | ಬನ್ನಾರಿ ಅಮ್ಮನ್ ಶುಗರ್ಸ್ ಲಿ, ಕುಂತೂರು, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ | 743682 | 75842 | 10.19 | 2955 |
| | **ದಾವಣಗೆರೆ ಜಿಲ್ಲೆ** | | | | |
| 45 | ದಾವಣಗೆರೆ ಶುಗರ್ಸ್ ಲಿ., ಕುಕ್ಕವಾಡ, ದಾವಣಗೆರೆ ತಾಲ್ಲೂಕು ಮತ್ತು ಜಿಲ್ಲೆ | 331713 | 31446 | 9.48 | 2755 |
| | **ಗದಗ್ ಜಿಲ್ಲೆ** | | | | |
| 46 | ವಿಜಯನಗರ ಶುಗರ್ಸ್ ಲಿ., (ಗುತ್ತಿಗೆದಾರರು– ಮೃಢಗಿರಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ.,) ಗಂಗಾಪುರ, ಮಂಡರಗಿ, ತಾಲ್ಲೂಕು, ಗದಗ್ ಜಿಲ್ಲೆ | 577020 | 47839 | 8.29 | 2755 |
| | **ಹಾಸನ ಜಿಲ್ಲೆ** | | | | |
| 47 | ಚಾಮುಂಡೇಶ್ವರಿ ಶುಗರ್ಸ್ ಲಿ., (ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆಯ ಗುತ್ತಿಗೆದಾರರು), ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ | 70273 | 5322 | 7.57 | 2755 |
| | **ಹಾವೇರಿ ಜಿಲ್ಲೆ** | | | | |
| 48 | ಜಿಎಂ ಶುಗರ್ಸ್ ಲಿ., (ಗುತ್ತಿಗೆದಾರರು–ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ನಿ.,) ಸಂಗೂರು, ಹಾವೇರಿ ತಾಲ್ಲೂಕು ಮತ್ತು ಹಾವೇರಿ ಜಿಲ್ಲೆ. | 413851 | 39075 | 9.44 | 2755 |
| | **ಕಲಬುರಗಿ ಜಿಲ್ಲೆ** | | | | |
| 49 | ಎನ್ಎಸ್ಎಲ್ ಶುಗರ್ಸ್ ಲಿ., (ಗುತ್ತಿಗೆದಾರರು–ಸಹಕಾರಿ ಸಕ್ಕರೆ ಕಾರ್ಖಾನೆ ನಿ.,) ಭೂಸನೂರು, ಆಳಂದ ತಾಲ್ಲೂಕು, ಕಲಬುರಗಿ ಜಿಲ್ಲೆ. | 418037 | 42023 | 10.05 | 2915 |
| 50 | ರೇಣುಕಾ ಶುಗರ್ಸ್, ಹವಳಗ, ಅಫ್ಜಲ್‌ಪುರ ತಾಲ್ಲೂಕು, ಕಲಬುರಗಿ ಜಿಲ್ಲೆ | 612982 | 30760 | 10.22 | 2964 |
| 51 | ಉಗಾರ್ ಶುಗರ್ಸ್ ವರ್ಕ್ಸ್ ಲಿ., ನಾಗರಹಳ್ಳಿ, ಜೇವರ್ಗಿ ತಾಲ್ಲೂಕು, ಕಲಬುರಗಿ ಜಿಲ್ಲೆ | 340076 | 37674 | 10.72 | 3109 |



| 1 | 2 | 3 | 4 | 5 | 6 |
|---|---|---|---|---|---|
| | ಮಂಡ್ಯ ಜಿಲ್ಲೆ | | | | |
| 52 | ಚಾಮುಂಡೇಶ್ವರಿ ಶುಗರ್ಸ್ ಲಿ, ಭಾರತಿ ನಗರ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ. | 781682 | 74672 | 9.55 | 2770 |
| 53 | ಕೋರಮಂಡಲ್ ಶುಗರ್ಸ್ ಲಿ., ಮಾಕವಳ್ಳಿ, ಕೆ.ಆರ್.ಪೇಟೆ ತಾಲ್ಲೂಕು, ಮಂಡ್ಯ ಜಿಲ್ಲೆ. | 656850 | 62797 | 9.56 | 2772 |
| 54 | ಎನ್‌ಎಸ್‌ಎಲ್ ಶುಗರ್ಸ್, ಕೊಪ್ಪ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ. | 993337 | 89082 | 9.24 | 2755 |
| 55 | ಎಂಆರ್‌ಎನ್ ಕೇನ್ ಪವರ್ ಅಂಡ್ ಬಯೋರಿಫೈನರೀಸ್ ಪ್ರೈ. ಲಿ., (ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಯ ಗುತ್ತಿಗೆದಾರರು), ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ | 158973 | 13211 | 8.31 | 2755 |
| | ಮೈಸೂರು ಜಿಲ್ಲೆ | | | | |
| 56 | ಬನ್ನಾರಿ ಅಮ್ಮನ್ ಶುಗರ್ಸ್ ಲಿ, ಅಲಗಂಚಿ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ | 1109450 | 107965 | 9.72 | 2819 |
| | ಉತ್ತರ ಕನ್ನಡ ಜಿಲ್ಲೆ | | | | |
| 57 | ಇ.ಐ.ಡಿ. ಪ್ಯಾರಿ (ಇಂಡಿಯಾ) ಲಿ., ಹುಲ್ಲಟ್ಟಿ, ಹಳಿಯಾಳ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ | 869944 | 99824 | 12.02 | 3486 |
| | ವಿಜಯಪುರ ಜಿಲ್ಲೆ | | | | |
| 58 | ಇಂಡಿಯನ್ ಶುಗರ್ ಮ್ಯಾನುಫ್ಯಾಕ್ಚರಿಂಗ್ ಕಂಪನಿ ಲಿ., ಹಾವಿನಾಳ, ಇಂಡಿ ತಾಲ್ಲೂಕು, ವಿಜಯಪುರ ಜಿಲ್ಲೆ | 297562 | 26515 | 8.91 | 2755 |
| 59 | ಜಮಖಂಡಿ ಶುಗರ್ಸ್ ಲಿ., (ಘಟಕ-2) ನಾದ್ ಕೆ.ಡಿ. ಇಂಡಿ ತಾಲ್ಲೂಕು ವಿಜಯಪುರ ಜಿಲ್ಲೆ | 440812 | 45411 | 10.68 | 3097 |
| 60 | ನಂದಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಕೃಷ್ಣಾನಗರ, ವಿಜಯಪುರ ತಾಲ್ಲೂಕು ಮತ್ತು ಜಿಲ್ಲೆ | 647565 | 62893 | 11.28 | 3271 |
| 61 | ಕೆ.ಪಿ.ಆರ್. ಶುಗರ್ ಮಿಲ್ಸ್, ಅಲಮೇಲು ಗ್ರಾಮ, ಸಿಂಧಗಿ ತಾಲ್ಲೂಕು, ವಿಜಯಪುರ ಜಿಲ್ಲೆ | 1074346 | 85423 | 10.31 | 2990 |
| 62 | ಮನಾಲಿ ಶುಗರ್ಸ್ ಲಿ., ಮಲಘಾಣ್, ಸಿಂದಗಿ ತಾಲ್ಲೂಕು, ವಿಜಯಪುರ ಜಿಲ್ಲೆ | 326740 | 28718 | 8.79 | 2755 |
| 63 | ಶ್ರೀ ಬಸವೇಶ್ವರ ಶುಗರ್ಸ್ ಲಿ., ಕಾರಜೋಳ, ಬಸವನಬಾಗೇವಾಡಿ ತಾಲ್ಲೂಕು, ವಿಜಯಪುರ ಜಿಲ್ಲೆ | 575379 | 62949 | 10.94 | 3173 |



| 1 | 2 | 3 | 4 | 5 | 6 |
|---|---|---|---|---|---|
| 64 | ಶ್ರೀ ಬಾಲಾಜಿ ಶುಗರ್ಸ್ & ಕೆಮಿಕಲ್ಸ್ ಪ್ರೈ.ಲಿ, ಯರಗಲ್, ಮುದ್ದೇಬಿಹಾಳ್ ತಾಲ್ಲೂಕು, ವಿಜಯಪುರ ಜಿಲ್ಲೆ | 656954 | 70268 | 10.70 | 3103 |
| 65 | ಶ್ರೀ ಭೀಮಶಂಕರ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಮರಗೂರು, ಇಂಡಿ ತಾಲ್ಲೂಕು, ವಿಜಯಪುರ ಜಿಲ್ಲೆ. | 403501 | 41738 | 10.34 | 2999 |
| | **ಯಾದಗಿರಿ ಜಿಲ್ಲೆ** | | | | |
| 66 | ಕೋರ್‌ಗ್ರೀನ್ ಶುಗರ್ಸ್ ಲಿ., ತುಮಕೂರು, ಶಹಪುರ ತಾಲ್ಲೂಕು, ಯಾದಗಿರಿ ಜಿಲ್ಲೆ | 342880 | 25888 | 10.09 | 2926 |

ಈ ಆದೇಶವನ್ನು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ 29.10.2021 ರಂದು ಹೊರಡಿಸಿರುತ್ತೇನೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ
ಸಕ್ಕರೆ ನಿರ್ದೇಶಕರು

ಇವರಿಗೆ:
ರಾಜ್ಯದ ಎಲ್ಲಾ ಸಕ್ಕರೆ ಕಾರ್ಖಾನೆಗಳ
ವ್ಯವಸ್ಥಾಪಕ ನಿರ್ದೇಶಕರು/
ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು.

ಪ್ರತಿಯನ್ನು:
1) ಸರ್ಕಾರದ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸಸೌಧ, ಬೆಂಗಳೂರು ಇವರಿಗೆ ಮಾಹಿತಿಗಾಗಿ ಸಲ್ಲಿಸಿದೆ.
2) ಜಿಲ್ಲಾಧಿಕಾರಿಗಳು, ಬೆಳಗಾವಿ/ ಬಾಗಲಕೋಟೆ/ ವಿಜಯಪುರ/ ಉತ್ತರ ಕನ್ನಡ/ ಗದಗ/ ಹಾವೇರಿ/ ಬೀದರ್/ ಕಲಬುರಗಿ/ ಯಾದಗಿರಿ/ ದಾವಣಗೆರೆ/ ಬಳ್ಳಾರಿ/ ಮಂಡ್ಯ/ ಮೈಸೂರು/ ಚಾಮರಾಜನಗರ ಇವರುಗಳಿಗೆ ಮಾಹಿತಿ ಹಾಗೂ ಸೂಕ್ತ ಕ್ರಮಕ್ಕಾಗಿ ಕಳುಹಿಸಿದೆ.

Ns